# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಸದಸ್ಯರ ಹೆಸರು | ಶ್ರೀ ಎಂ.ಎಲ್.ಅನಿಲ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 027 |
| ಉತ್ತರಿಸಬೇಕಾದ ದಿನಾಂಕ | 15.02.2022 |
| ಉತ್ತರಿಸಬೇಕಾದ ಸಚಿವರು | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಂಗಾರಪೇಟೆ, ಕೋಲಾರ, ಮತ್ತು ಮಾಲೂರು ತಾಲ್ಲೂಕುಗಳ ವ್ಯಾಪ್ತಿಯಲ್ಲಿ ಕುಡಿಯುವ ನೀರಿಗಾಗಿ ನಿರ್ಮಿಸಲಾಗುತ್ತಿರುವ "ಯರಗೋಳ್" ಯೋಜನೆಯ ಉದ್ದೇಶಗಳೇನು; (ವಿವರಗಳನ್ನು ನೀಡುವುದು) | ಮಾರ್ಕಂಡೇಯ ನದಿಗೆ ಅಡ್ಡಲಾಗಿ ಯರಗೋಳ್ ಗ್ರಾಮದ ಬಳಿ ಅಣೆಕಟ್ಟನ್ನು ನಿರ್ಮಿಸಲಾಗುತ್ತಿರುವ ಯೋಜನೆಯ ಉದ್ದೇಶ, ಕೋಲಾರ, ಮಾಲೂರು, ಬಂಗಾರಪೇಟೆ ಮತ್ತು ಮಾರ್ಗ ಮಧ್ಯದ 45 ಗ್ರಾಮಗಳ ಜನತೆಗೆ ಕುಡಿಯುವ ನೀರು ಒದಗಿಸುವುದಾಗಿರುತ್ತದೆ. |
| ಆ | ಈ ಯೋಜನೆ ಪ್ರಾರಂಭವಾಗಿನಿಂದ ಇದೂವರೆವಿಗೂ ಸರ್ಕಾರವು ವೆಚ್ಚ ಮಾಡಲಾಗಿರುವ ಹಣ ಎಷ್ಟು; (ರಾಜ್ಯ ಮತ್ತು ಕೇಂದ್ರದ ಪಾಲೆಷ್ಟು) | ಅ) ಮೊದಲನೇ ಹಂತದ ಕಾಮಗಾರಿಗಳು: 500 ಎಂ.ಸಿ.ಎಫ್.ಟಿ ಸಾಮರ್ಥ್ಯದ ಅಣೆಕಟ್ಟು ನಿರ್ಮಾಣ, ಪೂರಕ ಕಾಮಗಾರಿಗಳ ಹಾಗೂ ಭೂಸ್ವಾಧೀನ ವೆಚ್ಚ ಒಳಗೊಂಡಂತೆ ಇದೂವರೆಗಿನ ವೆಚ್ಚ ರೂ.159.98 ಕೋಟಿಗಳು.<br>ಆ) ಎರಡನೇ ಹಂತದ ಕಾಮಗಾರಿಗಳು: (ಯು.ಐ.ಡಿ.ಎಸ್.ಎಸ್. ಎಂ.ಟಿ ಯೋಜನೆ) ಏರುಕೊಳವೆ ಮಾರ್ಗ, ವಿತರಣಾಕೊಳವೆ ಮಾರ್ಗ, ಮೇಲ್ಮಟ್ಟದ ಜಲಸಂಗ್ರಹಾಗಾರಗಳು, ಶುದ್ಧೀಕರಣ ಘಟಕಗಳು ಹಾಗೂ ಪೂರಕ ಕಾಮಗಾರಿಗಳ ಇದುವರೆಗಿನ ವೆಚ್ಚ ರೂ.85.95ಕೋಟಿಗಳು.<br>(ರಾಜ್ಯ ಸರ್ಕಾರದ ಪಾಲು – ರೂ. 22.00 ಕೋಟಿಗಳು ಮತ್ತು ಕೇಂದ್ರ ಸರ್ಕಾರದ ಪಾಲು- ರೂ.63.94 ಕೋಟಿಗಳು)<br>ಒಟ್ಟು ವೆಚ್ಚ ರೂ.245.93 (ರೂ.159.98 + ರೂ.85.95) ಕೋಟಿಗಳು |

| | | |
|---|---|---|
| ಇ | ಈ ಯೋಜನೆ ಅನುಷ್ಠಾನಗೊಳಿಸಲು ವಿಳಂಬವಾಗಿರುವುದಕ್ಕೆ ಕಾರಣಗಳೇನು; (ವಿವರ ನೀಡುವುದು) | **ಅ)** ಕೋಲಾರ, ಮಾಲೂರು ಮತ್ತು ಬಂಗಾರಪೇಟೆ ಪಟ್ಟಣಗಳು ಹಾಗೂ ಮಾರ್ಗ ಮಧ್ಯದ 45 ಗ್ರಾಮಗಳಿಗೆ ಕುಡಿಯುವ ನೀರು ಒದಗಿಸುವ ಸಲುವಾಗಿ ಯರಗೋಳು ಗ್ರಾಮದ ಬಳಿ ಮಾರ್ಕಂಡೇಯ ನದಿಗೆ ಅಡ್ಡಲಾಗಿ ಆಣೆಕಟ್ಟು ನಿರ್ಮಿಸುವ ಯೋಜನೆಯನ್ನು ಅಂದಾಜು ವೆಚ್ಚ ರೂ. 160.00 ಕೋಟಿಗಳಿಗೆ ದಿನಾಂಕ: 22-8-2007 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.<br><br>ತದನಂತರ ಸದರಿ ಜಾಗದಲ್ಲಿನ ಭೂಸ್ವಾಧೀನ ಪ್ರಕ್ರಿಯೆಯನ್ನು ಕೋಲಾರ ಜಿಲ್ಲೆಯ ಕಂದಾಯ ಇಲಾಖೆಯ ಸಹಯೋಗದೊಂದಿಗೆ ಪ್ರಾರಂಭಿಸಲಾಗಿರುತ್ತದೆ. ಈ ಸಂಬಂಧ ಬಂಗಾರಪೇಟೆ ತಾಲ್ಲೂಕಿನ ತಹಶೀಲ್ದಾರ್ ಅವರು ಪತ್ರ ದಿನಾಂಕ 5-2-2008 ರಲ್ಲಿ, ಗುರುತಿಸಲಾದ ಖಾಸಗಿ ಮತ್ತು ಸರ್ಕಾರಿ (ಗೋಮಾಳ) ಜಮೀನನ್ನು ಭೂಸ್ವಾಧೀನ ಪಡಿಸುವ ಬಗ್ಗೆ, ಸಹಾಯಕ ಕಮೀಷನರ್, ಕೋಲಾರ ಉಪ ವಿಭಾಗ, ಕೋಲಾರ, ಇವರಿಗೆ ವಿವರಗಳನ್ನು ಸಲ್ಲಿಸಿರುತ್ತಾರೆ. ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರು ಪತ್ರ ಸಂಖ್ಯೆ ದಿನಾಂಕ 9.7.2008 ರಲ್ಲಿ ಸದರಿ ಯೋಜನೆಗೆ ಅವಶ್ಯವಿರುವ ಪ್ರದೇಶದಲ್ಲಿ ಸರ್ಕಾರಿ ಜಮೀನಿನ ಬಗ್ಗೆ ಹಾಗೂ ಖಾಸಗಿ ಜಮೀನಿನ ಬಗ್ಗೆ ಮಾತ್ರ ತಿಳಿಸಿ ಅವಶ್ಯ ಭೂಸ್ವಾಧೀನ ಶುಲ್ಕವನ್ನು ಭರಿಸಲು ಸೂಚಿಸಲಾಗಿರುತ್ತದೆ.<br><br>ಇದರ ಅನುಸಾರ ಭೂಸ್ವಾಧೀನ ಪ್ರಕ್ರಿಯೆಯಯನ್ನು ಮುಂದುವರಿಸಲಾಗಿರುತ್ತದೆ. ಆದರೆ ದಿನಾಂಕ 11.6.2010 ರಂದು ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸಂಬಂಧಿಸಿದ ಅರಣ್ಯ ಪ್ರದೇಶದ ಭೂಸ್ವಾಧೀನದ ಬಗ್ಗೆ ಪ್ರತ್ಯೇಕ ಪ್ರಸ್ತಾವನೆಯನ್ನು ಕೂಡಲೇ ಸಲ್ಲಿಸಲು ಮಂಡಳಿಯ ಅಧಿಕಾರಿಗಳಿಗೆ ಸೂಚಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಮಂಡಳಿಯು ಅರಣ್ಯ ಇಲಾಖೆಗೆ ಸಂಬಂಧಿಸಿದ 153.15 ಎಕರೆ ಜಮೀನನ್ನು ಸ್ವಾಧೀನ ಪಡಿಸಿಕೊಳ್ಳಲು ಕೇಂದ್ರ ಪರಿಸರ ಮತ್ತು ಅರಣ್ಯ ಇಲಾಖೆಯೊಂದಿಗೆ ವ್ಯವಹರಿಸಲು ಕ್ರಮ ಕೈಗೊಳ್ಳಲಾಯಿತು. ಈ ಹಿನ್ನೆಲೆಯಲ್ಲಿ ಕೇಂದ್ರ ಪರಿಸರ ಮತ್ತು ಅರಣ್ಯ ಇಲಾಖೆಗೆ ಅರಣ್ಯ ಪ್ರದೇಶದ ಭೂಸ್ವಾಧೀನ ಪ್ರಸ್ತಾವನೆಯನ್ನು ನಿಯಮಾನುಸಾರ ಸಲ್ಲಿಸಿ, ಹಲವು ಹಂತಗಳಲ್ಲಿ ಅನುಮತಿ ಪಡೆಯಲಾಗಿದ್ದು, ದಿನಾಂಕ 21.3.2013 ರಲ್ಲಿ ಹಸ್ತಾಂತರಿಸಲಾಗಿರುತ್ತದೆ. |

| | | |
|---|---|---|
| | | ಈ ಯೋಜನೆಗೆ ಅವಶ್ಯವಿರುವ ಒಟ್ಟು 375.37 ಎಕರೆ ಜಮೀನು ಭೂಸ್ವಾಧೀನ ಒಳಗೊಂಡಿದ್ದು ಈ ಜಮೀನುಗಳನ್ನು ಭೂಸ್ವಾಧೀನಗೊಳಿಸುವ ಸಂಬಂಧ, ವಿಶೇಷವಾಗಿ ಅರಣ್ಯ ಇಲಾಖೆಯ ಜಮೀನನ್ನು ಪಡೆಯುವಲ್ಲಿ ರಾಜ್ಯದ ಅರಣ್ಯ ಇಲಾಖೆ ಮತ್ತು ಭಾರತ ಸರ್ಕಾರದ ಕೇಂದ್ರ ಪರಿಸರ ಮತ್ತು ಅರಣ್ಯ ಇಲಾಖೆಯಿಂದ ಸಹಮತಿ ಪಡೆಯುವಲ್ಲಿ ಸಾಕಷ್ಟು ಸಮಯ ವಿನಿಯೋಗವಾಗಿರುತ್ತದೆ. ಈ ಅಂಶವು ಯೋಜನೆಯ 2 ವರ್ಷ 4 ತಿಂಗಳ ಅವಧಿ ವಿಳಂಬಕ್ಕೆ ಕಾರಣವಾಗಿರುತ್ತದೆ. ಈ ಕಾರಣದಿಂದ ಯೋಜನೆಯ ವಿವಿಧ ಘಟಕಗಳನ್ನು ನಿರ್ಮಿಸುವಲ್ಲಿ ವಿಳಂಬವಾಗಿರುತ್ತದೆ.<br><br>500 ಎಮ್.ಸಿ.ಎಫ್.ಟಿ ಸಾಮರ್ಥ್ಯದ ಅಣೆಕಟ್ಟು, ಪಂಪು ಮನೆ, ApproachRoad ಇತ್ಯಾದಿ, 10 ಕಿ.ಮೀ. MS ಕೊಳವೆ ಮಾರ್ಗ ಹಾಗೂ ಸಂಬಂಧಿತ ಕಾಮಗಾರಿಗಳನ್ನು ಮ\| Ramky Infrastructure Ltd, Hyderabad, ಇವರಿಗೆ ಕರಾರು ಒಪ್ಪಂದ ಸಂಖ್ಯೆ 09/2010-11, ದಿನಾಂಕ 30.11.2010 ರ ಅನ್ವಯ ವಹಿಸಲಾಗಿರುತ್ತದೆ.<br><br>**ವಿಳಂಬಕ್ಕೆ ಕಾರಣಗಳು ಈ ಕೆಳಗಿನಂತಿದೆ.**<br><br>i. ಈ ಯೋಜನೆಯ ಅನುಷ್ಠಾನಕ್ಕೆ ಒಟ್ಟು 375 ಎಕರೆ 37 ಗುಂಟೆ ಜಮೀನಿನ ಅವಶ್ಯಕತೆ ಇರುತ್ತದೆ. ವಿವರ ಈ ಕೆಳಗಿನಂತಿದೆ:<br>ಖಾಸಗಿ ಜಮೀನು — 127.10 ಎಕರೆ<br>ಅರಣ್ಯ ಭೂಮಿ — 153.15 ಎಕರೆ<br>ಸರ್ಕಾರಿ ಗೋಮಾಳ ಜಮೀನು — 95.12 ಎಕರೆ<br>**ಒಟ್ಟು ಜಮೀನು — 375.37 ಎಕರೆ**<br>ಭೂಸ್ವಾಧೀನಕ್ಕೆ ಒಟ್ಟು ರೂ.21.70 ಕೋಟಿ ಪಾವತಿಸಲಾಗಿದ್ದು, ಅದರಲ್ಲಿ ಅರಣ್ಯ ಭೂಮಿಯ ಭೂಸ್ವಾಧೀನಕ್ಕೆ ರೂ.15.03 ಕೋಟಿಗಳು ಹಾಗೂ ಸರ್ಕಾರಿ ಮತ್ತು ಖಾಸಗಿ ಜಮೀನಿಗೆ ರೂ.6.67 ಕೋಟಿಗಳನ್ನು ಪಾವತಿಸಲಾಗಿರುತ್ತದೆ.<br><br>ii. ಸದರಿ ಘಟಕಗಳನ್ನು ಸ್ಥಾಪಿಸುವ ಸ್ಥಳವು ಹೊರವಲಯ ಪ್ರದೇಶದಲ್ಲಿದ್ದರಿಂದ, ಮೊದಲು ಸರ್ಕಾರದ ಜಮೀನು ಎಂದು ಗುರುತಿಸಲಾಗಿ ತದನಂತರ ಅದು June 2010 ರಲ್ಲಿ ಅರಣ್ಯ ಪ್ರದೇಶವೆಂದು ಗುರುತಿಸಲಾಯಿತು. |

| | | |
|---|---|---|
| | | i. ಸದರಿ ಸ್ಥಳವು ಅರಣ್ಯ ಪ್ರದೇಶವಾದ್ದರಿಂದ, ಕೇಂದ್ರ ಪರಿಸರ ಮತ್ತು ಅರಣ್ಯ ಇಲಾಖೆಯಿಂದ ಹಲವು ಹಂತಗಳಲ್ಲಿ ಅನುಮತಿ ಪಡೆಯಲು ಅವಶ್ಯಕತೆ ಇದ್ದು March 2013 ರಲ್ಲಿ ಹಸ್ತಾಂತರಿಸಲಾಗಿರುತ್ತದೆ. ಈ ಕಾರಣ 2 ವರ್ಷ 4 ತಿಂಗಳು ವಿಳಂಬವಾಗಿರುತ್ತದೆ.<br>ii. ಆದರೆ ಅಣೆಕಟ್ಟು, ಪಂಪು ಮನೆ, Approach Road, ಇತ್ಯಾದಿ ಘಟಕಗಳನ್ನು ನಿರ್ಮಿಸಲು ಅರಣ್ಯ ಇಲಾಖೆಯು 21.3.2013 ರಂದು ಸ್ಥಳವನ್ನು ಹಸ್ತಾಂತರಿಸಿದ್ದರಿಂದ ಸದರಿ ಘಟಕಗಳ ನಿರ್ಮಾಣದಲ್ಲಿ ವಿಳಂಬವಾಗಿರುತ್ತದೆ.<br>iii. ಸದರಿ ಘಟಕಗಳನ್ನು ನಿರ್ಮಿಸುವ ಸ್ಥಳವು ಅರಣ್ಯ ಪ್ರದೇಶವಾಗಿದ್ದರಿಂದ, ಅಲ್ಲಿ ಮೂಲ ಸೌಕರ್ಯದ ಅಭಾವವಿದ್ದುದರಿಂದ ಕಾರ್ಮಿಕರು ಪದೇ ಪದೇ ಬಿಟ್ಟು ಹೋಗುತ್ತಿದ್ದರು. ಇದರಿಂದಾಗಿ ಕಾಮಗಾರಿಯನ್ನು ಪುನಃ ಪ್ರಾರಂಭಿಸಲು ಸಾಕಷ್ಟು ಕಾಲಾವಕಾಶ ಬೇಕಾಗಿದ್ದುದರಿಂದ ವಿಳಂಬವಾಗಿರುತ್ತದೆ.<br>iv. ಮುಂದುವರಿದಂತೆ, ಸದರಿ ಕಾಮಗಾರಿಗಳ ನಿರ್ಮಾಣಕ್ಕೆ Blasting of hard rock ಅವಶ್ಯವಿದ್ದು ಅದನ್ನು ಕೈಗೊಳ್ಳಲು 2014 ರಲ್ಲಿ ಲೋಕ ಸಭೆ ಚುನಾವಣೆ ಮಾದರಿ ನೀತಿ ಸಂಹಿತೆ ಜಾರಿಯಲ್ಲಿ ಇದ್ದರಿಂದ Blasting ಪರವಾನಿಗೆ ನೀಡುವಲ್ಲಿ ಹಾಗೂ Explosives ಸಾಗಿಸುವಲ್ಲಿ ವಿಳಂಬವಾಗಿರುತ್ತದೆ.<br>v. ದಿನಾಂಕ 30.10.2014 ರಿಂದ 21.5.2015 ವರೆಗೆ 33 Grade Cement ಅಭಾವವಿದ್ದರಿಂದ ಘಟಕಗಳ ನಿರ್ಮಾಣದಲ್ಲಿ ವಿಳಂಬವಾಗಿರುತ್ತದೆ.<br>vi. ಗುತ್ತಿಗೆದಾರರಿಂದ ವಿವಧ ಹಂತಗಳಲ್ಲಿ ಆದ ವಿಳಂಬಕ್ಕೆ ದಂಡವನ್ನುವಿಧಿಸಲಾಗಿರುತ್ತದೆ.<br>vii. ದಿನಾಂಕ 14-10-2014 ರಂದು ಮಾನ್ಯ ನಗರಾಭಿವೃದ್ಧಿ ಸಚಿವರು, ಉದ್ದೇಶಿತ ಆಣೆಕಟ್ಟು ಕಾಮಗಾರಿಯ ಪ್ರಗತಿ ಪರಿವೀಕ್ಷಣೆ ವೇಳೆ ನೀರಿನ ಲಭ್ಯತೆಯನ್ನು ಮರು ಪರಿಶೀಲಿಸುವಂತೆ ಆದೇಶ ನೀಡಿದ್ದರು. ಇದರ ಅನುಸಾರ ಉನ್ನತ ಮಟ್ಟದ ತಾಂತ್ರಿಕ ಸಮಿತಿ ರಚನೆ ಮಾಡಿ Indian Institute of Science, Bangalore ಅವರಿಗೆ ವರದಿ ನೀಡಲು ಕೋರಲಾಯಿತು. Indian Institute of Science, Bangalore ಅವರು ನೀರಿನ ಲಭ್ಯತೆಯ ಬಗ್ಗೆ August 2017 ರಲ್ಲಿ ವರದಿ ನೀಡಿದ ನಂತರ ಆಣೆಕಟ್ಟು ಕಾಮಗಾರಿಗಳನ್ನು ಮುಂದುವರಿಸಲಾಯಿತು. |

| | | |
|---|---|---|
| | | i. NIRM (National Institute of Rock Mechanics) ರವರು October 2017 ರಲ್ಲಿ ಅಣೆಕಟ್ಟು ನಿರ್ಮಿಸುವ ಪ್ರದೇಶವನ್ನು ಕೂಲಂಕುಶವಾಗಿ ಪರಿಶೀಲಿಸಿದ್ದು, ಆ ಸ್ಥಳದಲ್ಲಿ unfavourable weak strata (loose strata, dykes, mica etc) ಇರುವುದನ್ನು ಗುರುತಿಸಿ ಅಣೆಕಟ್ಟಿನ ಸ್ಥಿರತೆಗಾಗಿ ಹಾಗೂ ಸುರಕ್ಷತೆಗಾಗಿ ಸೂಕ್ತ treatment, grouting ಹಾಗೂ ಇತರೆ ಶಿಫಾರಸ್ಸುಗಳನ್ನು ನೀಡಿರುತ್ತಾರೆ. ಸದರಿ ಶಿಫಾರಸ್ಸುಗಳು ಹೆಚ್ಚುವರಿ ಕಾಮಗಾರಿಗಳಾದ್ದರಿಂದ ಅವುಗಳನ್ನು ಕಾರ್ಯಗತಗೊಳಿಸುವಲ್ಲಿ ವಿಳಂಬವಾಗಿರುತ್ತದೆ.<br>ii. ಇದರೊಂದಿಗೆ, ಭಾರತದಲ್ಲಿ February 2020 ರಿಂದ COVID 19 ಸಾಂಕ್ರಾಮಿಕ ಹರಡುತ್ತಿದ್ದ ಕಾರಣ, ಸರ್ಕಾರವು LOCKDOWN ಆಗಾಗ್ಗೆ ಜಾರಿಗೊಳಿಸುತ್ತಿದ್ದರಿಂದ, ಯೋಜನೆಯ ಕಾಮಗಾರಿಗಳಲ್ಲಿ ವಿಳಂಬವಾಗಿರುತ್ತದೆ.<br>iii. ಸದರಿ ಅಣೆಕಟ್ಟು, ಜಾಕ್‌ವೆಲ್ ಮತ್ತು ಕಾಮಸಮುದ್ರದವರೆಗು ಏರುಕೊಳವೆ ಮಾರ್ಗ 9.15 ಕಿ.ಮೀ ಹಾಗೂ ಪೂರಕ ಕಾಮಗಾರಿಗಳು ದಿನಾಂಕ: 30-09-2020 ರಂದು ಪೂರ್ಣಗೊಂಡಿದ್ದು ಪ್ರಸ್ತುತ 375 ಎಂ.ಸಿ.ಎಫ್.ಟಿ ನೀರು ಶೇಖರಣೆಯಾಗಿರುತ್ತದೆ.<br><br>**ಆ) ಎರಡನೇ ಹಂತದ ಕಾಮಗಾರಿಗಳು (ಯು.ಐ.ಡಿ.ಎಸ್.ಎಸ್. ಎಂ.ಟಿ. ಯೋಜನೆ) :**<br>ಈ ಯೋಜನೆಯಡಿ MS ಏರು ಕೊಳವೆ ಮಾರ್ಗ, ಬಂಗಾರಪೇಟೆ ಪಟ್ಟಣದಲ್ಲಿ 13 MLD ಜಲ ಶುದ್ಧೀಕರಣ ಘಟಕ, ಕೋಲಾರ ನಗರದಲ್ಲಿ 29.42 MLD ಜಲ ಶುದ್ಧೀಕರಣ ಘಟಕ, ಕೋಲಾರ, ಮಾಲೂರು ಮತ್ತು ಬಂಗಾರಪೇಟೆ ನಗರಗಳಲ್ಲಿ ಮೇಲ್ಮಟ್ಟದ ಜಲಸಂಗ್ರಹಾರಗಳು ಮತ್ತು ವಿತರಣಾ ಜಾಲ ಅಳವಡಿಸುವ ಕಾಮಗಾರಿಯನ್ನು ಉದ್ದೇಶಿಸಲಾಗಿರುತ್ತದೆ. ಸದರಿ ಯೋಜನೆಯು ಕೇಂದ್ರ ಸರ್ಕಾರ ಪುರಸ್ಕೃತ ಯೋಜನೆಯಾಗಿದ್ದು, ಇದಕ್ಕೆ 16.6.2007 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ತದನಂತರ ದಿನಾಂಕ 10.11.2008 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿ ಮೆ\|\| Engineering Projects (India) Limited Hyderabad ಇವರಿಗೆ ಗುತ್ತಿಗೆ ಸಂಖ್ಯೆ 07/08-09, ದಿನಾಂಕ 19.1.2009 ರಲ್ಲಿ ವಹಿಸಲಾಗಿರುತ್ತದೆ. |

| | | |
|---|---|---|
| | | ಸದರಿ ಗುತ್ತಿಗೆಯಲ್ಲಿ ವಿಳಂಬಕ್ಕೆ ಕಾರಣಗಳು ಈ ಕೆಳಗಿನಂತಿರುತ್ತವೆ:<br>i. ಬಂಗಾರಪೇಟೆಯಲ್ಲಿ 13 MLD ಸಾಮರ್ಥ್ಯದ ಜಲ ಶುದ್ಧೀಕರಣ ಘಟಕದ ನಿರ್ಮಾಣಕ್ಕೆ ಅವಶ್ಯವಿರುವ ಜಮೀನನ್ನು April 2015 ರಲ್ಲಿ ಹಸ್ತಾಂತರಿಸಿದ್ದರಿಂದ, ಹಾಗೂ ಕೋಲಾರ ನಗರದಲ್ಲಿ 4 ಮೇಲ್ಮಟ್ಟ ಜಲಸಂಗ್ರಹಾಗಾರಗಳನ್ನು ನಿರ್ಮಿಸಲು ಅಗತ್ಯವಿದ್ದ ಜಮೀನನ್ನು ಸಂಬಂಧಿಸಿದ ಸ್ಥಳೀಯ ಸಂಸ್ಥೆಗಳಿಂದ June 2019 ರಲ್ಲಿ ಹಸ್ತಾಂತರಿಸಿದ್ದರಿಂದ, ಮೆ\|\| Engineering Projects (India) Limited Hyderabad ಗುತ್ತಿಗೆದಾರರು ಸದರಿ ಕಾಮಗಾರಿಗಳನ್ನು ನಿರ್ವಹಿಸಲು ನಿರಾಕರಿಸಿರುತ್ತಾರೆ.<br>ii. ಗುತ್ತಿಗೆದಾರರಿಂದ ವಿಳಂಬವಾಗಿರುವ ಅವಧಿಗೆ ದಂಡವನ್ನು ವಿಧಿಸಲಾಗಿರುತ್ತದೆ.<br>iii. ಈ ಕಾರಣದಿಂದ ಮೆ\|\| Engineering Projects (India) Limited Hyderabad ಅವರ ಗುತ್ತಿಗೆಯಿಂದ ಸದರಿ ಕಾಮಗಾರಿಗಳನ್ನು October 2018 ರಲ್ಲಿ ಹಿಂಪಡೆಯಲಾಗಿರುತ್ತದೆ.<br>iv. ಬಂಗಾರಪೇಟೆಯಲ್ಲಿ 13 MLD ಸಾಮರ್ಥ್ಯದ ಜಲ ಶುದ್ಧೀಕರಣ ಘಟಕವನ್ನು ಬೇರೆ ಗುತ್ತಿಗೆದಾರರಿಗೆ March 2019 ರಲ್ಲಿ ವಹಿಸಲಾಗಿರುತ್ತದೆ.<br>v. ಬಂಗಾರಪೇಟೆ-ಕೋಲಾರ, ಬಂಗಾರಪೇಟೆ-ಮಾಲೂರು ನಡುವೆ ಕೊಳವೆ ಮಾರ್ಗಗಳನ್ನು ಅಳವಡಿಸಲು ರೈಲ್ವೆ ಇಲಾಖೆಯ ವತಿಯಿಂದ ಅನುಮತಿಯು March 2020 ರಲ್ಲಿ ದೊರೆತಿರುವುದರಿಂದ ಕಾಮಗಾರಿಯಲ್ಲಿ ವಿಳಂಬವಾಗಿರುತ್ತದೆ.<br>vi. ಇದರೊಂದಿಗೆ, ಭಾರತದಲ್ಲಿ February 2020 ರಿಂದ COVID 19 ಸಾಂಕ್ರಾಮಿಕ ಹರಡುತ್ತಿದ್ದ ಕಾರಣ, ಸರ್ಕಾರವು ಮೊದಲನೇ ಅಲೆ ಮತ್ತು ಎರಡನೇ ಅಲೆಯಲ್ಲಿ LOCKDOWN ಜಾರಿಗೊಳಿಸಿದ್ದರಿಂದ, ಯೋಜನೆಯ ಕಾಮಗಾರಿಗಳಲ್ಲಿ ವಿಳಂಬವಾಗಿರುತ್ತದೆ<br>vii. ಕೋಲಾರ ನಗರದಲ್ಲಿನ ಉಳಿದ 4 ಮೇಲ್ಮಟ್ಟದ ಜಲಸಂಗ್ರಹಾರಗಳ ನಿರ್ಮಾಣಕ್ಕೆ ತಗುಲುವ ವೆಚ್ಚವು ಮೂಲ ಯೋಜನಾ ಅಂದಾಜು ಪಟ್ಟಿಯಲ್ಲಿನ ಮೊತ್ತಕ್ಕಿಂತ ಹೆಚ್ಚು ಆಗುವುದರಿಂದ, ಸರ್ಕಾರದಿಂದ ರೂ.127.76 ಕೋಟಿಗಳಿಗೆ January 2021 ರಲ್ಲಿ ಅನುಮೋದನೆಯಾಗಿದ್ದು ಪರಿಷ್ಕೃತ ಅಂದಾಜು |

| | | |
|---|---|---|
| | | viii. ಪಟ್ಟಿಯ ಅನುಸಾರ ಟೆಂಡರ್ ಆಹ್ವಾನಿಸಲು ಕ್ರಮ ಕೈಗೊಳ್ಳಲಾಗಿದೆ.<br>ಪರಿಷ್ಕೃತ ಅಂದಾಜು ಪಟ್ಟಿಯ ಆರ್ಥಿಕ ಮಾದರಿಯಂತೆ ರೂ.47.84 ಕೋಟಿಗಳನ್ನು ಐ.ಇ.ಬಿ.ಆರ್ ಸಾಲದ ಮುಖಾಂತರ ಸಾಲ ಪಡೆಯಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. ಅದರಂತೆ ಅನುಮತಿ ದೊರೆತ ನಂತರ ಉಳಿದ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುವುದು. |
| ಈ | ಈ ವಿಳಂಬದಿಂದಾಗಿ ಸದರಿ ಯೋಜನೆಗೆ ತಗಲಿರುವ ಹೆಚ್ಚುವರಿ ವೆಚ್ಚ ಎಷ್ಟು | ಮೊದಲನೇ ಹಂತದ ಹಾಗೂ ಎರಡನೇ ಹಂತದ ಯೋಜನೆಗಳಿಗೆ ಹೆಚ್ಚುವರಿ ವೆಚ್ಚದ ವಿವರ ಈ ಕೆಳಕಂಡಂತಿರುತ್ತದೆ.<br>**ರೂ.ಕೋಟಿಗಳಲ್ಲಿ** (see table below) |
| ಉ) | ಈ ಯೋಜನೆಯನ್ನು ಯಾವ ಸಮಯದೊಳಗೆ ಲೋಕಾರ್ಪಣೆ ಮಾಡಲಾಗುವುದು? | ಐ.ಇ.ಬಿ.ಆರ್ ಸಾಲ ಮಂಜೂರಾದ ನಂತರ 3 ತಿಂಗಳ ಅವಧಿಯಲ್ಲಿ ಯೋಜನೆಯನ್ನು ಚಾಲನೆ ಮಾಡಲಾಗುವುದು. |

**ರೂ.ಕೋಟಿಗಳಲ್ಲಿ**

| ಕ್ರ. ಸಂ | ಯೋಜನೆಯ ಹೆಸರು | ಅಂದಾಜು ಮೊತ್ತ | ಪರಿಷ್ಕೃತಅಂದಾಜುಮೊತ್ತ | ಹೆಚ್ಚುವರಿ ಮೊತ್ತ |
|---|---|---|---|---|
| 1 | ಮೊದಲನೇ ಹಂತದ ಯೋಜನೆ | 160.00 | 186.00 | 26.00 |
| 2 | ಎರಡನೇ ಹಂತದ ಯೋಜನೆ | 79.92 | 127.76 | 47.84 |
| | **ಒಟ್ಟು** | **239.92** | **313.76** | **73.84** |

ಸಂಖ್ಯೆ ನಅಇ 9 ಯುಎಂಎಸ್ 2022

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು